

ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | **1544** |
| ಸದಸ್ಯರ ಹೆಸರು | **ಶ್ರೀ ಬಸವರಾಜ ಶಿವಲಿಂಗಪ್ಪ ಹೊರಟ್ಟಿ (ಶಿಕ್ಷಕರ ಕ್ಷೇತ್ರ)** |
| ಉತ್ತರಿಸಬೇಕಾದ ದಿನಾಂಕ | **19.03.2020** |
| ಉತ್ತರಿಸುವ ಸಚಿವರು | ಸನ್ಮಾನ್ಯ ಮುಖ್ಯಮಂತ್ರಿಗಳು |

| ಪ್ರಶ್ನೆ | ಉತ್ತರ |
|---|---|
| (ಅ) ಕರ್ನಾಟಕ ಕೇಡರ್‌ನ ನಾಗರೀಕ ಸೇವೆಯಿಂದ (ಕೆ.ಎ.ಎಸ್) ಭಾರತೀಯ ನಾಗರೀಕ ಸೇವೆ (ಐ.ಎ.ಎಸ್) ಗೆ 2015ರಲ್ಲಿ ಪದೋನ್ನತಿ ನೀಡಿರುವ ಪಟ್ಟಿಯನ್ನು ಮರು ಪರಿಶೀಲಿಸದೆ ಹೊಸದಾಗಿ ಬಡ್ತಿ ನೀಡಲು ಕೇಂದ್ರ ಲೋಕಸೇವಾ ಆಯೋಗಕ್ಕೆ (ಯು.ಪಿ.ಎಸ್.ಸಿ) ಕಳುಹಿಸಿಕೊಡಲಾಗಿದೆಯೇ; ಕಳುಹಿಸಿಕೊಟ್ಟಿದ್ದಲ್ಲಿ, ಪ್ರಗತಿ ಏನು; | 2016ರ ಆಯ್ಕೆ ಪಟ್ಟಿಗೆ ಅರ್ಹರಿರುವ ಅಭ್ಯರ್ಥಿಗಳ ಮಾಹಿತಿಯೊಂದಿಗೆ ಪ್ರಸ್ತಾವನೆಯನ್ನು ಕೇಂದ್ರ ಲೋಕ ಸೇವಾ ಆಯೋಗಕ್ಕೆ ಸಲ್ಲಿಸಲಾಗಿದ್ದು, ಈ ಬಗ್ಗೆ ಕೆಲವು ಅಂಶಗಳಿಗೆ ಸ್ಪಷ್ಟೀಕರಣ ನೀಡುವಂತೆ ಕೇಂದ್ರ ಲೋಕ ಸೇವಾ ಆಯೋಗವು ರಾಜ್ಯ ಸರ್ಕಾರವನ್ನು ಕೋರಿರುತ್ತದೆ. ಸದರಿ ಪ್ರಸ್ತಾವನೆಯು ಪರಿಶೀಲನೆಯಲ್ಲಿದೆ.<br><br>2015ರಲ್ಲಿ ಪದೋನ್ನತಿ ನೀಡಿರುವ ಪಟ್ಟಿಯನ್ನು ಮರು ಪರಿಶೀಲಿಸುವುದು ಕೇಂದ್ರ ಲೋಕ ಸೇವಾ ಆಯೋಗದ ವ್ಯಾಪ್ತಿಗೆ ಒಳಪಟ್ಟಿದೆ. |
| (ಆ) 2006, 2008, 2010ನೇ ಸಾಲಿನ ಕೆ.ಎ.ಎಸ್ ಅಧಿಕಾರಿಗಳ ಐ.ಎ.ಎಸ್. ಬಡ್ತಿಗೆ ಕೇಂದ್ರ ಸರ್ಕಾರದ ಸಿಬ್ಬಂದಿ ಮತ್ತು ತರಬೇತಿ ಇಲಾಖೆ ಯಾವ ಕ್ರಮ ಕೈಗೊಂಡಿದೆ; 2016 ರಿಂದ 2019ರ ವರೆಗೆ ಎಷ್ಟು ಅಧಿಕಾರಿಗಳಿಗೆ ಐ.ಎ.ಎಸ್. ಗೆ ಬಡ್ತಿ ನೀಡಲಾಗಿದೆ; | ಸೆಲೆಕ್ಟ್ ಲಿಸ್ಟ್-2017, 2018 ಮತ್ತು 2019ಕ್ಕೆ ಹುದ್ದೆಗಳನ್ನು ಗುರುತಿಸಿ ಆದೇಶ ಹೊರಡಿಸಲು (ಡಿಟರ್ಮಿನೇಶನ್) ಕೇಂದ್ರ ಸಿಬ್ಬಂದಿ ಮತ್ತು ತರಬೇತಿ ಇಲಾಖೆಯನ್ನು ಕೋರಲಾಗಿದೆ.<br><br>2016 ರಿಂದ 2019 ರವರೆಗೆ ಸೆಲೆಕ್ಟ್ ಲಿಸ್ಟ್-2015 ಕ್ಕೆ ಸಂಬಂಧಿಸಿದಂತೆ ಒಟ್ಟು 33 ಕೆ.ಎ.ಎಸ್ ಅಧಿಕಾರಿಗಳಿಗೆ ಐ.ಎ.ಎಸ್ ಗೆ ಬಡ್ತಿ ನೀಡಲಾಗಿದೆ. |
| (ಇ) ಕೇಂದ್ರೀಯ ಆಡಳಿತ ನ್ಯಾಯ ಮಂಡಳಿ (ಸಿ.ಎ.ಟಿ) ನಿರ್ದೇಶನ ನೀಡಿದಾಗ್ಯೂ ಅರ್ಹ ಅಭ್ಯರ್ಥಿಗಳಿಗೆ ಐ.ಎ.ಎಸ್. ಗೆ ಬಡ್ತಿ ನೀಡಲು ವಿಳಂಬವೇಕೆ; ಇದು ನ್ಯಾಯಾಂಗ ನಿಂದನೆ ಆಗುವುದಿಲ್ಲವೆ ಹಾಗೂ ಇದಕ್ಕೆ ಸರ್ಕಾರ ತಕ್ಷಣ ಸ್ಪಂದಿಸುವುದೇ; | ಮಾನ್ಯ ಕೇಂದ್ರೀಯ ಆಡಳಿತ ನ್ಯಾಯ ಮಂಡಳಿಯು (ಸಿ.ಎ.ಟಿ) ರಾಜ್ಯ ಸರ್ಕಾರಕ್ಕೆ ನೀಡುರುವ ಆದೇಶವನ್ನು ಪಾಲಿಸಿ ಈಗಾಗಲೇ ಕೇಂದ್ರ ಲೋಕ ಸೇವಾ ಆಯೋಗಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಲಾಗಿದೆ. ಕೇಂದ್ರ ಲೋಕ ಸೇವಾ ಆಯೋಗವು ಕೇಂದ್ರೀಯ ಆಡಳಿತ ನ್ಯಾಯ ಮಂಡಳಿಯಲ್ಲಿ ವಿವಾದಿಸಿರುವಂತಹ ಅಂಶಗಳನ್ನೇ ಮತ್ತೆ ತಿಳಿಸುತ್ತಾ ರಾಜ್ಯ ಸರ್ಕಾರದ ಪ್ರಸ್ತಾವನೆಯನ್ನು ಹಿಂತಿರುಗಿಸಿದ್ದು, ಕೆಲವು ಸ್ಪಷ್ಟೀಕರಣ ನೀಡುವಂತೆ ಕೋರಿರುತ್ತದೆ. |

| | |
|---|---|
| (ಈ) 1998–99 ಹಾಗೂ 2014ನೇ ಸಾಲಿನ ಕೆ.ಎ.ಎಸ್. ಅಧಿಕಾರಿಗಳ ಪೈಕಿ ಎಷ್ಟು ಜನರಿಗೆ ಈ ಹಿಂದೆ ಬಡ್ತಿ ನೀಡಲಾಗಿತ್ತು; ಅದರ ಫಲಿತಾಂಶವೇನು; | 1998–99 ಸಾಲಿನ 33 ಕೆ.ಎ.ಎಸ್ ಅಧಿಕಾರಿಗಳಿಗೆ ಐ.ಎ.ಎಸ್ ಗೆ ಬಡ್ತಿ ನೀಡಲಾಗಿದೆ. 2014ನೇ ಸಾಲಿನ ಕೆ.ಎ.ಎಸ್. ಅಧಿಕಾರಿಗಳು ಐ.ಎ.ಎಸ್.ಗೆ ಬಡ್ತಿ ಹೊಂದಲು ಪ್ರಸ್ತುತ ನಿಯಮಾನುಸಾರ ಅರ್ಹತೆ ಹೊಂದಿರುವುದಿಲ್ಲ. |
| (ಉ) 1998ನೇ ಸಾಲಿನ ಕೆ.ಎ.ಎಸ್ ಅಕ್ರಮ ನೇಮಕಾತಿ ಪ್ರಕರಣದಲ್ಲಿ ನ್ಯಾಯಾಲಯದ ತೀರ್ಪಿನಂತೆ ಆಯ್ಕೆ ಪಟ್ಟಿಯನ್ನು ರಾಜ್ಯ ಸರ್ಕಾರವು ಡಿ.ಓ.ಪಿ.ಟಿ.ಗೆ ಸಲ್ಲಿಸಿದೆಯೇ; ಸಲ್ಲಿಸಿದ್ದರೆ, ಯಾವ ದಿನಾಂಕದಂದು ಸಲ್ಲಿಸಲಾಗಿದೆ; ಸಲ್ಲಿಸದಿದ್ದರೆ, ಅದಕ್ಕೆ ಕಾರಣಗಳೇನು; | 1998ನೇ ಸಾಲಿನ ಕೆ.ಎ.ಎಸ್. ಅಧಿಕಾರಿಗಳ ಪರಿಷ್ಕೃತ ಆಯ್ಕೆ ಪಟ್ಟಿಯನ್ನು ಕೆ.ಪಿ.ಎಸ್.ಸಿ.ಯು ಸಿದ್ಧಪಡಿಸಿ ರಾಜ್ಯ ಸರ್ಕಾರಕ್ಕೆ ನೀಡುತ್ತದೆ. ಕೆ.ಎ.ಎಸ್. ಆಯ್ಕೆ ಪಟ್ಟಿಯನ್ನು ಡಿ.ಒ.ಪಿ.ಟಿ.ಗೆ ಸಲ್ಲಿಸುವ ಅವಶ್ಯಕತೆ ಇರುವುದಿಲ್ಲ. |
| (ಊ) 1998 ರಿಂದ 2015ರವರೆಗೆ ಕೆ.ಎ.ಎಸ್. ನಿಂದ ಐ.ಎ.ಎಸ್. ಗೆ ಬಡ್ತಿ ನೀಡಲು ಸರ್ಕಾರ ವಿಳಂಬ ಮಾಡುತ್ತಿರುವುದು ನಿಜವೇ; ನಿಜವಿದ್ದಲ್ಲಿ, ಕಾರಣಗಳೇನು; ತಕ್ಷಣ ಅರ್ಹರಾದ್ದಂತಹ ಕೆ.ಎ.ಎಸ್. ಅಧಿಕಾರಿಗಳಿಗೆ ಬಡ್ತಿ ನೀಡಲು ಯಾವ ಕಾಲಮಿತಿಯಲ್ಲಿ ಕ್ರಮ ತೆಗೆದುಕೊಳ್ಳಲಾಗುವುದು? | ನಿಜವಲ್ಲ. 2015ರ ಸೆಲೆಕ್ಟ್ ಲಿಸ್ಟ್‌ನಲ್ಲಿ 33 ಅಧಿಕಾರಿಗಳಿಗೆ ಐ.ಎ.ಎಸ್.ಗೆ ಈಗಾಗಲೇ ಬಡ್ತಿ ನೀಡಲಾಗಿದೆ. ಕೆ.ಎ.ಎಸ್. ಅಧಿಕಾರಿಗಳಿಗೆ ಐ.ಎ.ಎಸ್. ಹುದ್ದೆಗೆ ಬಡ್ತಿ ನೀಡುವುದರಲ್ಲಿ ಡಿ.ಒ.ಪಿ.ಟಿ. ಮತ್ತು ಯು.ಪಿ.ಎಸ್.ಸಿ ಯ ಪಾತ್ರ ನಿರ್ಧಾರಾತ್ಮಕವಾಗಿರುವುದರಿಂದ ಕಾಲಮಿತಿಯನ್ನು ತಿಳಿಸುವುದು ಸಾಧ್ಯವಾಗುವುದಿಲ್ಲ. |

ಕಡತ ಸಂಖ್ಯೆ: ಇ–ಸಿಆಸುಇ 134 ಎಸ್ಎಎಸ್ 2020

ಬಿ.ಎಸ್. ಯಡಿಯೂರಪ್ಪ

**(ಬಿ.ಎಸ್.ಯಡಿಯೂರಪ್ಪ)**

ಮುಖ್ಯಮಂತ್ರಿ.